# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 498 (560) |
| ಸದಸ್ಯರ ಹೆಸರು | | ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | 21-02-2022 |
| ಉತ್ತರಿಸಬೇಕಾದ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಪ್ರಶ್ನೆ | | ಉತ್ತರ |
| ಅ) | 2015ರ ಮುಂಚೆ ಅನುದಾನಿತ ಪದವಿ ಕಾಲೇಜುಗಳ ಪ್ರಾಧ್ಯಾಪಕರ ನೇಮಕಾತಿ ಪ್ರಕ್ರಿಯೆಯು ಇ-ಪೋರ್ಟನಲ್ಲಿದ್ದು, "ಕೋವಿಡ್-19" ತಾಂತ್ರಿಕ ಮತ್ತು ಆಡಳಿತಾತ್ಮಕ ಕಾರಣಗಳಿಂದ ನೇಮಕಾತಿ ಪ್ರಕ್ರಿಯೆ ಸ್ಥಗಿತವಾಗಿದ್ದರಿಂದ ಅಭ್ಯರ್ಥಿಗಳ ವಯೋಮಿತಿ ಮೀರಿ ಸಂಕಷ್ಟ ಎದುರಾಗಿದ್ದು, ಅಂತಹ ಅಭ್ಯರ್ಥಿಗಳ ಹಿತದೃಷ್ಟಿಯಿಂದ 02 ವರ್ಷ ಸಡಿಲಿಕೆ ಮಾಡಿ ಪ್ರಕ್ರಿಯೆಗೆ ಚಾಲನೆ ನೀಡುವ ಯೋಜನೆ ಸರ್ಕಾರದ ಮುಂದಿದೆಯೇ; | ಸರ್ಕಾರದ ಪತ್ರ ಸಂಖ್ಯೆ:ಇಡಿ/240/ಯುಪಿಸಿ/2014, ದಿನಾಂಕ:01.09.2017 ರಲ್ಲಿ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ, ದಿನಾಂಕ:31.12.2015 ರೊಳಗೆ ನಿವೃತ್ತಿ, ಮರಣ, ರಾಜೀನಾಮೆ ಹಾಗೂ ಇತರೆ ಕಾರಣಗಳಿಂದ ಖಾಲಿ ಇರುವ ಬೋಧಕ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಲಾಗಿದ್ದು, ಅದರಂತೆ. ಹುದ್ದೆಗಳನ್ನು ಭರ್ತಿ ಮಾಡಲು ಇಲಾಖಾವತಿಯಿಂದ ಕ್ರಮವಹಿಸಲಾಗುತ್ತಿತ್ತು.<br><br>ಆದರೆ, ಕೋವಿಡ್-19ರ ಹಿನ್ನೆಲೆಯಲ್ಲಿ ಆರ್ಥಿಕ |
| ಆ) | ಹಾಗಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು? | ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂಖ್ಯೆ: ಆಇ/157/ವೆಚ್ಚ-8/2020, ದಿನಾಂಕ:10.06.2020 & ಆಇ/3/ಬಿಇಎಂ/2020, ದಿನಾಂಕ:06.07.2020 ರನ್ವಯ ಆರ್ಥಿಕ ಮಿತವ್ಯಯ ಆದೇಶ ಜಾರಿಗೊಳಿಸಿದ್ದರಿಂದ ಬೋಧಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಳ್ಳುತ್ತಿಲ್ಲ.<br><br>ಆದಾಗ್ಯೂ, ಬೋಧಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರ ಹಾಗೂ ಇಲಾಖೆಯ ವಿವಿಧ ಹಂತಗಳಲ್ಲಿ ಬಾಕಿ ಇರುವ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಆರ್ಥಿಕ ಮಿತವ್ಯಯ ಆದೇಶವನ್ನು ಸಡಿಲಿಸಿ ಸಹಮತಿ ನೀಡುವಂತೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. ಆರ್ಥಿಕ ಮಿತವ್ಯಯ ಆದೇಶ ತೆರವುಗೊಳಿಸಿದ ನಂತರ ಅಗತ್ಯ ಕ್ರಮ ಕೈಗೊಳ್ಳಲಾಗುವುದು.<br><br>ಮುಂದುವರೆದು, ಈಗಾಗಲೇ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಬೋಧಕರ ಹುದ್ದೆಯ ನೇರ ನೇಮಕಾತಿಗಾಗಿ ಸರ್ಕಾರದ ಆದೇಶ ಸಂಖ್ಯೆ:ಇಡಿ/ 49/ಯುಪಿಸಿ/2018, ದಿ:20.06.2018 ರಲ್ಲಿ ಗರಿಷ್ಠ ವಯೋಮಿತಿಯನ್ನು ಹೆಚ್ಚಿಸಿದ್ದು, ಅದರಂತೆ, |

| | | |
|---|---|---|
| | | ಸಾಮಾನ್ಯ ಅಭ್ಯರ್ಥಿಗಳಿಗೆ-40 ವರ್ಷಗಳು, ಇತರೆ ಹಿಂದುಳಿದ ವರ್ಗಗಳ ಪ್ರವರ್ಗ-II(a), II (b), III(a) ಮತ್ತು III (b) ಗಳಿಗೆ-43 ವರ್ಷಗಳು ಮತ್ತು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ-I ಕ್ಕೆ-45 ವರ್ಷಗಳೆಂದು ಹೆಚ್ಚಿಸಲಾಗಿದೆ ಹಾಗೂ ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ: ಇಡಿ /87/ಯುಪಿಸಿ/2016, ದಿನಾಂಕ:13.12.2018 ರಲ್ಲಿ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಪೂರ್ಣಕಾಲಿಕ ಬೋಧನಾನುಭವ ಹೊಂದಿರುವ ಅಭ್ಯರ್ಥಿಗಳಿಗೆ ಗರಿಷ್ಟ ವಯೋಮಿತಿಯನ್ನು ನಿಗದಿಪಡಿಸುವುದರೊಂದಿಗೆ ಅವರು ಬೋಧನಾನುಭವ ಹೊಂದಿರುವ ಸೇವಾವಧಿ ಅಥವಾ 5 ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಅವಧಿಗೆ ಗರಿಷ್ಟ ವಯೋಮಿತಿಯಲ್ಲಿ ವಿನಾಯಿತಿ ನೀಡಲು ಸರ್ಕಾರವು ಅವಕಾಶ ಕಲ್ಪಿಸಿದೆ. |

ಇಡಿ 31 ಯುಪಿಸಿ 2022

**(ಡಾ: ಅಶ್ವಥ್ ನಾರಾಯಣ ಸಿ.ಎನ್.)**
ಉನ್ನತ ಶಿಕ್ಷಣ, ಐ.ಟಿ.-ಬಿ.ಟಿ. ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು